# ಈಶಾನ್ಯ ಭಾರತದ ಜನರು

## ಸಾರ್ಸ್-ಕೋವಿ-2 ಸೋಂಕನ್ನು ಹರಡುತ್ತಿದ್ದಾರೆಯೇ?

ಕೋವಿಡ್-19 ಎನ್ನುವುದು ಒಂದು ಪ್ರಾಣಿಮೂಲ ರೋಗ. ಅಂದರೆ, ಸಾರ್ಸ್-ಕೋವಿ-2 ವೈರಾಣು ಪ್ರಾಣಿಗಳಿಂದ ಮನುಷ್ಯರಿಗೆ ಬಂದಿದೆ. ಈ ಹರಡುವಿಕೆಯು ದೇಶದ ಹೊರಭಾಗದಲ್ಲಿ ಸಂಭವಿಸಿದ್ದು, ಭಾರತದೊಳಗಿನ ಯಾವುದೇ ನಿರ್ದಿಷ್ಟ ಸಮುದಾಯ ಅಥವಾ ಜನಾಂಗೀಯ ಗುಂಪುಗಳಿಗೂ ಇದಕ್ಕೂ ಯಾವ ಸಂಬಂಧವೂ ಇಲ್ಲವೆಂದು ಅಧ್ಯಯನಗಳು ಸೂಚಿಸಿವೆ. ಆದ್ದರಿಂದ, ನಿರ್ದಿಷ್ಟ ಪ್ರಾಂತ್ಯ ಅಥವಾ ಜನಾಂಗೀಯ ಮೂಲದ ಜನರು ಇತರರಿಗಿಂತ ಹೆಚ್ಚಾಗಿ ಈ ರೋಗವನ್ನು ಹರಡುತ್ತಾರೆ ಎನ್ನುವುದನ್ನು ಸೂಚಿಸಲು ಸಾಕ್ಷ್ಯಾಧಾರಗಳಿಲ್ಲ.

ಇಂತಹ ಆಧಾರರಹಿತ ಹಾಗೂ ದೃಢೀಕೃತವಲ್ಲದ ವದಂತಿಗಳು ಈ ಪಿಡುಗಿಗೆ ವಿಶಿಷ್ಟವಾದುವುಗಳೇನಲ್ಲ. ಯುರೋಪಿನಲ್ಲಿ ಪ್ಲೇಗ್ ಮಹಾಮಾರಿಯು (ಬ್ಲ್ಯಾಕ್ ಡೆತ್) ಆವರಿಸಿದ್ದ ಅವಧಿಯಲ್ಲಿ ಯಹೂದಿ ಸಮುದಾಯಗಳಿಗೆ ಸಂಬಂಧಿಸಿದಂತೆ, ಎಬೋಲ ಸಾಂಕ್ರಾಮಿಕದ ಸಮಯದಲ್ಲಿ ಆಫ್ರಿಕನ್ನರ ಬಗ್ಗೆ, ಹಾಂಕಾಂಗ್‌ನಲ್ಲಿ ಸಾರ್ಸ್-ಕೋವಿಡ್ ಹರಡಿದ್ದ ವೇಳೆ ಚೀನೀಯರ ಕುರಿತಂತೆ ಇಂತಹ ಭೀತಿ, ಅಭದ್ರತೆಯ ಭಾವನೆಗಳು ಕಂಡುಬಂದಿದ್ದವು ಎಂಬುದಾಗಿ ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ. ಈ ಪ್ರತಿಯೊಂದು ಸನ್ನಿವೇಶದಲ್ಲಿಯೂ ರೋಗದ ಹರಡುವಿಕೆಯೊಡನೆ ಸಂಬಂಧವಿದೆಯೆಂಬ ಭೀತಿಯಿಂದಾಗಿ ಕೆಲವು ಜನರನ್ನು ತಾರತಮ್ಯ ದೃಷ್ಟಿಯಿಂದ ನೋಡಲಾಯಿತು ಹಾಗೂ ಅವರನ್ನು ಕಳಂಕಿತರಂತೆ ಪರಿಗಣಿಸಲಾಯಿತು. ಈ ತೆರನಾದ ಪ್ರತಿಕ್ರಿಯೆಗಳು ಕಿರುಕುಳ, ನಿಂದನೆ, ಹಿಂಸೆಗೊಳಗಾದ ಜನರಿಗೆ ಆಘಾತಕಾರಿಯಾಗಿದ್ದವು ಹಾಗೂ ಅವು ನ್ಯಾಯಸಮ್ಮತವಲ್ಲ. ಇಂತಹ ಗಾಳಿಸುದ್ದಿಗಳು ಸಾಮಾಜಿಕ ಅಶಾಂತಿಯನ್ನು ಹುಟ್ಟುಹಾಕಬಲ್ಲವು ಹಾಗೂ ನಮ್ಮನ್ನು ಜನಾಂಗೀಯ, ಪ್ರಾದೇಶಿಕ ಹಾಗೂ ರಾಷ್ಟ್ರೀಯ ನೆಲೆಗಳಲ್ಲಿ ವಿಭಜಿಸಬಲ್ಲವು.



ಕೃಪೆ: Chaipau, Wikimedia Commons. URL: https://commons.wikimedia.org/wiki/File:India-locator-map-NE.svg. License: CC-BY-SA.

ಸಾರ್ಸ್-ಕೋವಿ-2 ಸೋಂಕಿಗೊಳಗಾದ ವ್ಯಕ್ತಿಯ ಸಂಪರ್ಕಕ್ಕೆ ಬಂದಲ್ಲಿ ಯಾವುದೇ ಜನಾಂಗೀಯ ಮೂಲದ, ಜಾತಿ-ಧರ್ಮದ ಅಥವಾ ರಾಷ್ಟ್ರದ ವ್ಯಕ್ತಿಯಾದರೂ ಸೋಂಕಿಗೆ ಒಳಗಾಗುವ ಸಾಧ್ಯತೆಯಿದೆ. ಯಾವುದೇ ಸೋಂಕಿತ ವ್ಯಕ್ತಿಯು ತನ್ನ ಸಂಪರ್ಕಕ್ಕೆ ಬಂದ, ಮುಖಗವುಸು (ಮಾಸ್ಕ್) ಧರಿಸದೇ ಇರುವ, ಕ್ವಾರಂಟೈನ್ ನಿಯಮಗಳನ್ನು ಪಾಲಿಸದಿರುವ ಹಾಗೂ ಇನ್ನಿತರ ಮುಂಜಾಗರೂಕತೆಯ ಕ್ರಮಗಳನ್ನು ಕೈಗೊಳ್ಳದೇ ಇರುವ ವ್ಯಕ್ತಿಗಳಿಗೆ ಸೋಂಕನ್ನು ಹರಡಬಹುದು.

ಈ ಹಿನ್ನೆಲೆಯಲ್ಲಿ, ನಾವು ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯದ ಹೇಳಿಕೆಯನ್ನು ಉಲ್ಲೇಖಿಸುತ್ತೇವೆ:"ಸಾಂಕ್ರಾಮಿಕ ರೋಗಗಳು ಕಾಣಿಸಿಕೊಂಡ ಸಮಯದಲ್ಲಿ ಸಾರ್ವಜನಿಕ ಆರೋಗ್ಯಕ್ಕೆ ಸಂಬಂಧಿಸಿದ ತುರ್ತುಪರಿಸ್ಥಿತಿಗಳು ಭೀತಿ, ಆತಂಕಗಳನ್ನು ಸೃಷ್ಟಿಸಬಹುದು. ಆ ಮೂಲಕ ಜನ ಹಾಗೂ ಸಮುದಾಯಗಳ ವಿರುದ್ಧ ಪೂರ್ವಾಗ್ರಹ, ಸಾಮಾಜಿಕ ಪ್ರತ್ಯೇಕತೆ ಹಾಗೂ ಕಳಂಕಗಳಿಗೆ ದಾರಿ ಮಾಡಿಕೊಡಬಹುದು. ಇಂತಹ ವರ್ತನೆ, ನಡವಳಿಕೆಗಳು ದ್ವೇಷ-ಹಗೆತನಗಳನ್ನು, ಅರಾಜಕತೆಯನ್ನು, ಅನಗತ್ಯ ಸಾಮಾಜಿಕ ಕ್ಷೋಭೆಗಳನ್ನು ಹೆಚ್ಚಿಸಬಹುದು. ಇಂತಹ ಪೂರ್ವಾಗ್ರಹಗಳನ್ನು ತಡೆಯುವ ನಿಟ್ಟಿನಲ್ಲಿ ತುರ್ತಾಗಿ ಕಾರ್ಯೋನ್ಮುಖರಾಗಬೇಕಿದೆ ಹಾಗೂ ಆರೋಗ್ಯ ಸಾಕ್ಷರತೆಯಿಂದ ಸಬಲರಾದ, ಈ ಪ್ರತಿಕೂಲ ಸನ್ನಿವೇಶದಲ್ಲಿ ಸಮಂಜಸವಾಗಿ ಸ್ಪಂದಿಸುವ ಸಮುದಾಯವಾಗಿ ಎದ್ದು ನಿಲ್ಲಬೇಕಿದೆ." ಒಟ್ಟಾಗಿ ನಿಂತರೆ ಮನುಕುಲವು ಉಳಿಯುತ್ತದೆ, ಒಡಕಿನಿಂದ ಅಳಿಯುತ್ತದೆ!

**ಟಿಪ್ಪಣಿ:**

1. ಇಂಡಿಯನ್ ಸೈಂಟಿಸ್ಟ್ಸ್ ರೆಸ್ಪಾನ್ಸ್ ಟು ಕೋವಿಡ್–19 (ಐಎಸ್ಆರ್‌ಸಿ) ಜಾಲತಾಣದಲ್ಲಿ ಈ ಪ್ರತಿಕ್ರಿಯೆಗಳನ್ನು ಮೊದಲು ಪ್ರಕಟಿಸಲಾಗಿತ್ತು.

2. ಲೇಖನದ ಶೀರ್ಷಿಕೆಯ ಹಿನ್ನೆಲೆಯಲ್ಲಿ ಬಳಸಲಾದ ಚಿತ್ರದ ಮೂಲ : http://pixabay.com/photos/coronavirus-corona-virus-covid- 19-4958989/. ಕೃಪೆ: thiagolazarino, Pixabay. Licence CC-0.

**ಇಂಡಿಯನ್ ಸೈಂಟಿಸ್ಟ್ಸ್ ರೆಸ್ಪಾನ್ಸ್ ಟು ಕೋವಿಡ್–19 (ಐಎಸ್ಆರ್‌ಸಿ)** ಎಂಬುದು ಸುಮಾರು ಐನೂರು ಭಾರತೀಯ ವಿಜ್ಞಾನಿಗಳು, ಎಂಜಿನಿಯರ್‌ಗಳು, ತಂತ್ರಜ್ಞರು, ವೈದ್ಯರು, ಸಾರ್ವಜನಿಕ ಆರೋಗ್ಯ ತಜ್ಞರು, ವಿಜ್ಞಾನ ಸಂವಹನಕಾರರು, ಪತ್ರಕರ್ತರು ಮತ್ತು ವಿದ್ಯಾರ್ಥಿಗಳು ಸೇರಿ ಪ್ರಪಂಚದಾದ್ಯಂತ ಹರಡಿರುವ ಕೋವಿಡ್–19ಗೆ ಪ್ರತಿಸ್ಪಂದಿಸಿ ಸ್ವಯಿಚ್ಛೆಯಿಂದ ರಚಿಸಿಕೊಂಡ ಗುಂಪು. ಈ ಗುಂಪಿನ ಮಿಂಚಂಚೆ indscicov@gmail.com.

ಅನುವಾದ: **ಸಹನಾ ಹೆಗಡೆ** । ಪರಿಶೀಲನೆ: **ಎಸ್ ವಿ ಮಂಜುನಾಥ್**